## ೪

# ಇಂಗ್ಲಿಷ್ ಥ್ರೂ ಫೋಕ್‌ಟೇಲ್ಸ್: ಎ ಸೆಲ್ಫ್–ಸ್ಟಡಿ ಬುಕ್ – ಆನಂದ್ ಮಹಾನಂದ್ ಮತ್ತು ಲಲಿತಾ ಗೋಸ್ವಾಮಿ

– ಡಾ. ಕಮಲ್ ಕುಮಾರ್ ಚೌಧರಿ




**English through Folktales: A Self-Study Book, by Anand Mahanand, & Goswami, Lalita**

ಇಂಗ್ಲಿಷ್ ಥ್ರೂ ಫೋಕ್‌ಟೇಲ್ಸ್: ಎ ಸೆಲ್ಫ್–ಸ್ಟಡಿ ಬುಕ್ (ಜನಪದ ಕತೆಗಳ ಮೂಲಕ ಇಂಗ್ಲಿಷ್– ಸ್ವ ಅಭ್ಯಾಸದ ಪುಸ್ತಕ)

**ಲೇಖಕರು:** ಆನಂದ್ ಮಹಾನಂದ್,
ಮತ್ತು ಲಲಿತಾ ಗೋಸ್ವಾಮಿ

**ವರ್ಷ:** ೨೦೧೧
**ಪುಟಗಳು:** ೯೭
**ಪ್ರಕಟಣೆ:** ವಿವಾ ಬುಕ್ಸ್ ನವದೆಹಲಿ
ISBN: 978-81-309-1472-5

**ಸಾರಾಂಶ:** ಜಾನಪದ ಕಥೆಗಳನ್ನು ಬಳಸಿ ಭಾಷಾ ಕಲಿಕೆ ಎನ್ನುವುದೇ ಒಂದು ಅಮೋಘವಾದ ಪ್ರಯೋಗವಾಗಿದೆ. ಕಥೆಗಳು ಸಾಮಾನ್ಯವಾಗಿ ತಮ್ಮದೇ ರೀತಿಯಲ್ಲಿ ಹಲವು ವಿಷಯಗಳನ್ನು ಹೇಳಬಲ್ಲವು. ಜಾನಪದ ಕಥೆಗಳಂತೂ ಮನೆಯಿಂದ ಮನೆಗೆ ಸುಲಭವಾಗಿ ಹಬ್ಬುವುದರಿಂದ ಇವುಗಳ ಮೂಲಕ ಭಾಷಾ ಬೋಧನೆ ಹಾಗೂ ವ್ಯಾಕರಣ ಬೋಧನೆ ಸಾಧ್ಯವಿದೆ. ಇದನ್ನು ಒಬ್ಬ ಶಿಕ್ಷಕರು ಹೇಗೆ ಮಾಡಬಹುದು ಎಂದು ಈ ಪುಸ್ತಕವು ಪರಿಚಯ ಮಾಡಿಕೊಡುತ್ತದೆ.

**ಪ್ರಮುಖ ಪದಗಳು: ಕಥೆಗಳು ಮತ್ತು ವ್ಯಾಕರಣ ಬೋಧನೆ– story and grammar teaching, ಇಂಗ್ಲಿಷ್ ಭಾಷಾ ಸುಧಾರಣೆ ಪುಸ್ತಕ– book for improving english, ಭಾಷೆಯ ಬೋಧನೆಯಲ್ಲಿ ಜನಪದ ಕಥೆಗಳ ಪಾತ್ರ– role of folktales in teaching language, ಭಾಷಾ ಬೋಧನೆಗೆ ಶೈಕ್ಷಣಿಕ ಸಂಪನ್ಮೂಲ– pedagogical materils for teaching language, ಮಾಧ್ಯಮಿಕ ಶಾಲಾ ಮಕ್ಕಳನ್ನು ಗುರಿಯಾಗಿಸಿದೆ– intended for middle school children.**

ಈ ಪುಸ್ತಕವು ಭಾರತದ ವಿವಿಧ ಭಾಗಗಳಿಗೆ ಸೇರಿದ ಹದಿನಾರು ಜಾನಪದ ಕಥೆಗಳನ್ನು ಒಳಗೊಂಡಿದೆ. ಇದು ತುಂಬ ಸರಳವಾದ ಭಾಷೆಯಲ್ಲಿದೆ ಮತ್ತು ಕಥೆಯ ಕೆಲವು ಸನ್ನಿವೇಶಗಳನ್ನು ಚಿತ್ರಗಳ ಮೂಲಕವೂ ವಿವರಿಸಲಾಗಿದೆ. ಆ ಮೂಲಕ ಇದು ಮಕ್ಕಳಿಗೆ ಆಸಕ್ತಿದಾಯಕವಾಗಿದೆ. ಲೇಖಕರು ಹೇಳಿರುವಂತೆ, ಈ ಪುಸ್ತಕವು, ಮಾಧ್ಯಮಿಕ ಶಾಲಾ ಮಕ್ಕಳನ್ನು ಗುರಿಯಾಗಿರಿಸಿದೆ. ಇದರ ವಿನ್ಯಾಸವು, ಭಾಷೆಯ ಮೂಲಭೂತ ಕೌಶಲಗಳಾದ ಓದುವುದು, ಬರೆಯುವುದು, ಮಾತನಾಡುವುದು ಮತ್ತು ಕೇಳುವುದನ್ನು ಮಾತ್ರವಲ್ಲದೆ, ಮೂಲಭೂತ ವ್ಯಾಕರಣ ರಚನೆಗಳನ್ನು ಸುಧಾರಣೆಮಾಡಿಕೊಳ್ಳಲೂ ಸಹಾಯಮಾಡುವಂತೆ ಇದೆ. ಈ ಗುರಿಯನ್ನು ಸಾಧಿಸಲು, ಪ್ರತಿಯೊಂದು ಕಥೆಯ ಕೊನೆಯಲ್ಲಿ ವಿವಿಧ ಭಾಷಾಭ್ಯಾಸಗಳಿಗೆ ಸಹಾಯವಾಗುವಂತೆ ಟಿಪ್ಪಣಿಗಳನ್ನು, ವಿಷಯ ಗ್ರಹಿಕೆಯ ಪ್ರಶ್ನೆಗಳನ್ನು, ಭಾಷಾ ಅಧ್ಯಯನ ಪ್ರಕ್ರಿಯೆಗಳನ್ನು ಮತ್ತು ಸಂವಹನ ಕೌಶಲಗಳನ್ನು ಹೆಚ್ಚಿಸುವ ಚಟುವಟಿಕೆಗಳನ್ನು ಕೊಡಲಾಗಿದೆ. ಟಿಪ್ಪಣಿಗಳಲ್ಲಿ ಹೊಸ ಪದಗಳ ಅರ್ಥಗಳನ್ನು (ಪಠ್ಯದಲ್ಲಿನ ಕಷ್ಟದ ಪದಗಳಿಗೆ) ಕೊಡಲಾಗಿದೆ, ಮತ್ತು ಕೆಲವು ನಿರ್ದಿಷ್ಟ ಪದಗಳನ್ನು ವಾಕ್ಯಗಳಾಗಿ ಪ್ರಯೋಗಿಸಿಯೂ ತೋರಿಸಲಾಗಿದೆ. ಅನಂತರ, ಕಥೆಯನ್ನು ಆಧರಿಸಿ ಸ್ವಂತ ಆಲೋಚನೆಯನ್ನು ಬೆಳೆಸುವ ಗ್ರಹಣ ಸಾಮರ್ಥ್ಯದ ಪ್ರಶ್ನೆಗಳಿವೆ. ಮುಂದೆ, ಭಾಷೆಯನ್ನು ಅಭ್ಯಾಸಮಾಡುವ ಮತ್ತು ಸಂವಹನ ಕೌಶಲಗಳ ಬೆಳವಣಿಗೆಯನ್ನು ಉದ್ದೇಶಿಸಿದ ಅಭ್ಯಾಸಗಳಿವೆ. ಈ ರೀತಿಯಾಗಿ ಈ ಪುಸ್ತಕವು, ಅದರಲ್ಲೂ ವಿಶೇಷವಾಗಿ ಮಕ್ಕಳು, ಇಂಗ್ಲಿಷ್ ಭಾಷಾ ಸುಧಾರಣೆ ಮಾಡಿಕೊಳ್ಳಲು ನೆರವಾಗುವಂತೆ ಇದೆ. ಕಥೆಗಳು ಮಕ್ಕಳನ್ನು ಓದಿಗೆ ಸೆಳೆಯುವಂತೆ ಇವೆ, ಮತ್ತು ಅದೇ ಸಮಯದಲ್ಲಿ ಅವು ಮಕ್ಕಳ ವಿವಿಧ ಭಾಷಾ ಕೌಶಲಗಳನ್ನೂ ಸುಧಾರಿಸುವಂತೆ ಇವೆ.

ಭಾರತದಂತಹ ಒಂದು ದೇಶದಲ್ಲಿ ಇಂಗ್ಲಿಷ್ ಭಾಷೆಯ ಕಲಿಕೆ ಮಕ್ಕಳಿಗೆ ಮಾತ್ರವಲ್ಲದೆ ವಯಸ್ಕರಿಗೂ ಮುಖ್ಯವಾಗಿದೆ. ಉದ್ದಕ್ಕೂ ಹಿಂದಿ ಅಥವಾ ಪ್ರಾದೇಶಿಕ ಭಾಷೆಯೊಂದರಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗಳು, ಕಾಲೇಜು ಅಥವಾ

ಇನ್ನಿತರ ಶೈಕ್ಷಣಿಕ ಸಂಸ್ಥೆಗಳನ್ನು ಸೇರುವಾಗ ಭಾಷಿಕವಾದ ಹಲವಾರು ಸಮಸ್ಯೆಗಳನ್ನು – ಅದರಲ್ಲೂ ನಿರ್ದಿಷ್ಟವಾಗಿ ಆ ಕೋರ್ಸನ್ನು ಇಂಗ್ಲಿಷ್‌ನಲ್ಲಿ ನೀಡಲಾಗುತ್ತಿದ್ದರೆ – ಎದುರಿಸುತ್ತಾರೆ. ಐಐಟಿಗಳಂತಹ ಸಂಸ್ಥೆಗಳಲ್ಲಿಯೂ ಮೊದಲನೇ ವರ್ಷದ ವಿದ್ಯಾರ್ಥಿಗಳಿಗೆ ಪರಿಹಾರ ಬೋಧನಾ ತರಗತಿಗಳನ್ನು ನಡೆಸುತ್ತಾರೆ. ಏಕೆಂದರೆ, ಇಂಗ್ಲಿಷಿನಲ್ಲಿ ಬೋಧಿಸಲಾಗುವ ಕೆಲವು ಉಪನ್ಯಾಸಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಅವರು ನಿಜವಾಗಿಯೂ ಸಮಸ್ಯೆಗಳನ್ನು ಎದುರಿಸುತ್ತಾರೆ. ಭಾಷೆಯ ಬೋಧನೆಯಲ್ಲಿ ಹಲವಾರು ವಿಧಾನಗಳಿವೆ, ಮತ್ತು ಕಳೆದ ಕೆಲವು ದಶಕಗಳಲ್ಲಿ ಉಪಯುಕ್ತವಾಗುವ ವಿವಿಧ ಸಂಪನ್ಮೂಲಗಳನ್ನು ಮತ್ತು ವಿಧಾನಗಳನ್ನು ಅಭಿವೃದ್ಧಿಪಡಿಸಲಾಗಿದೆ. ಆದರೆ ಭಾಷೆಯ ಬೋಧನೆಯಲ್ಲಿ ಜಾನಪದ ಕಥೆಗಳ ಪಾತ್ರಕ್ಕೆ ಸಮನಾದುದು ಇನ್ನೊಂದಿಲ್ಲ. ಜಾನಪದ ಕಥೆಗಳ ಮೂಲಕ ಭಾಷೆಯನ್ನು ಕಲಿಯುವುದು ಖಂಡಿತವಾಗಿಯೂ ನಿಶ್ಚಿತ ಫಲಗಳನ್ನು ನೀಡುತ್ತದೆ ಎಂಬುದು ನನ್ನ ನಂಬಿಕೆಯಾಗಿದೆ. ಹಾಗಾಗಿ, ಇಂಥ ಒಂದು ಪುಸ್ತಕವು ಮಕ್ಕಳಿಗೆ ನಿಜವಾಗಿಯೂ ಮುಖ್ಯವಾಗುತ್ತದೆ, ಯಾಕೆಂದರೆ, ಕಥೆಗಳು ಕುತೂಹಲಕಾರಿಯಾಗಿವೆ, ಮತ್ತು ಅವುಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು. ಇದಲ್ಲದೆ, ಇದು ವಿಭಿನ್ನ ಪದಗಳ ಮತ್ತು ಪದಗುಚ್ಛಗಳ ಸಂಪತ್ತನ್ನು ಹೆಚ್ಚಿಸುವುದರೊಂದಿಗೆ ಅವುಗಳ ಬಳಕೆಗೂ ಪ್ರೇರೇಪಿಸುತ್ತದೆ. ಕೊಟ್ಟಿರುವ ಚಟುವಟಿಕೆಗಳು ಸೂಕ್ತವಾಗಿವೆ ಮತ್ತು ಮಕ್ಕಳು ತಮ್ಮ ಇಂಗ್ಲಿಷನ್ನು ಸುಧಾರಿಸಿಕೊಳ್ಳಲು ಖಂಡಿತವಾಗಿಯೂ ಸಹಾಯಮಾಡುತ್ತವೆ. ಅಲ್ಲದೆ, ಹೆಚ್ಚಿನ ಕಥೆಗಳು ಜನರಿಗೆ ತಿಳಿದಿರುವುದರಿಂದ, ಭಾಷೆಯನ್ನು ಅರ್ಥಮಾಡಿಕೊಳ್ಳುವುದು ಸುಲಭವಾಗುತ್ತದೆ.

ಈ ಪುಸ್ತಕದಲ್ಲಿ ಸೇರಿಸಿಕೊಳ್ಳುವುದಕ್ಕೆ ಸಂಪಾದಿಸಿದ ಕಥೆಗಳು ಚೆನ್ನಾಗಿವೆ ಮತ್ತು ಮಕ್ಕಳಿಗೆ ಆಸಕ್ತಿದಾಯಕವೂ ಆಗಿವೆ. ಇಲ್ಲಿ ಸಂಗ್ರಹಿಸಲಾದ ವಿವಿಧ ಕಥೆಗಳ ಮಟ್ಟದಲ್ಲಿ ಏಕರೂಪತೆ ಇದ್ದಿದ್ದರೆ ಅದು ಇನ್ನೂ ಉತ್ತಮವಾಗಿರುತ್ತಿತ್ತು. ಕೆಲವು ಕಥೆಗಳು ಪ್ರಾಥಮಿಕ ಮಟ್ಟದ್ದಾಗಿವೆ ಮತ್ತು ಅವು ಈ ಪುಸ್ತಕದ ಒಟ್ಟಾರೆ ಉದ್ದೇಶಿತ ಪರಿಣಾಮದ ಮೇಲೆ ವ್ಯತಿರಿಕ್ತ ಪ್ರಭಾವವನ್ನೂ ಬೀರಬಹುದು. ಇದಲ್ಲದೆ, ಕೊಡಲಾದ ಚಟುವಟಿಕೆಗಳಲ್ಲಿಯೂ ಏಕರೂಪತೆಯಿಲ್ಲ. ಉದಾಹರಣೆಗೆ, ಎಲ್ಲ ಅಧ್ಯಾಯಗಳೂ ಮೇಲೆ ಹೇಳಿದ ರೀತಿಯ ನಾಲ್ಕೂ ಚಟುವಟಿಕೆಗಳನ್ನು ಹೊಂದಿಲ್ಲ, ಕೆಲವು ಅಧ್ಯಾಯಗಳು ವಿಮರ್ಶಾತ್ಮಕ ಮೌಲ್ಯಮಾಪನ, ಬರವಣಿಗೆ ಕೌಶಲಗಳು, ಇತ್ಯಾದಿಗಳನ್ನು ಒಳಗೊಂಡಿವೆ; ಮತ್ತು ಕೆಲವು ಅಧ್ಯಾಯಗಳು ಭಾಷಾ ಕೌಶಲಗಳನ್ನು ಒಳಗೊಂಡಿಲ್ಲ. ಆದ್ದರಿಂದ, ಈ ಚಟುವಟಿಕೆಗಳನ್ನು ಇನ್ನೂ ಹೆಚ್ಚಿನ ಮಟ್ಟದ ವ್ಯವಸ್ಥಿತ ರೂಪದಲ್ಲಿ ಸಂಘಟಿಸಬೇಕು. ಭವಿಷ್ಯದ ಆವೃತ್ತಿಗಳಲ್ಲಿ ಈ ಅಂಶಗಳನ್ನು ಖಂಡಿತವಾಗಿಯೂ ಸುಧಾರಿಸಬಹುದು. ಈ ಪುಸ್ತಕವು ಭಾಷಾ ಬೋಧನೆಗೆ ಈ

ವರೆಗೆ ಇದ್ದ ಒಂದು ರೀತಿಯ ಶೈಕ್ಷಣಿಕ ಸಂಪನ್ಮೂಲದ ಕೊರತೆಯನ್ನು ತುಂಬಿದೆ ಎಂಬ ಬಗ್ಗೆ ಯಾವ ವಿವಾದವೂ ಇಲ್ಲ.

* * *

**ಚಿಂತನಾತ್ಮಕ ಪ್ರಶ್ನೆಗಳು:**

೧. ಈ ಪುಸ್ತಕ ಪರಿಚಯವು ನಿಮ್ಮಲ್ಲಿ ಯಾವ ನಿರೀಕ್ಷೆಗಳನ್ನು ಉಂಟುಮಾಡಿದೆ?

೨. ಸಾಂಪ್ರದಾಯಿಕ ಪದ್ಧತಿಗಳಿಗೂ ಕಥೆಗಳ ಮೂಲಕ ಭಾಷಾ ಬೋಧನೆ ಮಾಡುವುದಕ್ಕೂ ಯಾವ ವ್ಯತ್ಯಾಸಗಳಿವೆ?

**ಕಮಲ್ ಕುಮಾರ್ ಚೌಧರಿ:** (ಪಿಎಚ್.ಡಿ., ಲೈಸಿಗ್) ಅವರು ಪಂಜಾಬಿನ ರೋಪರ್‌ನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ ಮಾನವಿಕ ಮತ್ತು ಸಮಾಜ ವಿಜ್ಞಾನ ವಿಭಾಗದಲ್ಲಿ ಸಹಾಯಕ ಪ್ರೊಫೆಸರ್ ಆಗಿದ್ದಾರೆ. ಡಾ. ಚೌಧರಿ ಅವರ ಅಧ್ಯಯನ ಕ್ಷೇತ್ರಗಳು ನ್ಯೂರೋ/ಸೈಕೋಲಿಂಗ್ವಿಸ್ಟಿಕ್ಸ್, ಸಿಂಟ್ಯಾಕ್ಸ್, ಕಾಗ್ನಿಟಿವ್ ಸೈನ್ಸ್, ಮತ್ತು ನ್ಯಾಚುರಲ್ ಲ್ಯಾಂಗ್ವೇಜ್ ಪ್ರೊಸೆಸಿಂಗ್‌ಗಳಾಗಿವೆ. ಈ ಕ್ಷೇತ್ರಗಳಲ್ಲಿ ಅವರು ಇತರರಿಗೆ ಶಿಕ್ಷಣ ಕೂಡ ನೀಡುತ್ತಾರೆ. kchoudhary1@googlemail.com

**ಅನುವಾದ:** ಕಾರ್ತಿಕ್ ಕೆ / **ಪರಿಶೀಲನೆ:** ನಾಗಮಣಿ ಎಸ್ ಎನ್

**ಮೂಲ:** Language and Language Teaching Volume 1 Number 2 July 2012.

❑